ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

2008ರ ನಂತರ ನೇಮಕಗೊಂಡ ಶಿಕ್ಷಕರ/ಉಪನ್ಯಾಸಕರ ಎಕ್ಸ್‌ಗ್ರೇಷಿಯಾ ನೀಡುವ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) :-

933 (1176) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಈ ಹಿಂದೆ ಶಿಕ್ಷಕರ ವೇತನ ತಾರತಮ್ಯ ಸರಿಪಡಿಸಲು (ಪ್ರೌಢ ಶಾಲಾ ಹಾಗೂ ಪದವಿ ಪೂರ್ವ, ಶಿಕ್ಷಕರು, ಮುಖ್ಯ ಗುರುಗಳು, ಪ್ರಾಚಾರ್ಯರು ಉಪನ್ಯಾಸಕರು) ಎಕ್ಸ್‌ಗ್ರೇಷಿಯಾ ನೀಡಲಾಗಿತ್ತೇ ; ಆ ಎಕ್ಸ್‌ಗ್ರೇಷಿಯಾವನ್ನು ಒಂದು ಇನ್‌ಕ್ರಿಮೆಂಟ್ ಆಗಿ ಪರಿವರ್ತಿಸಿ ಮೂಲ ವೇತನದಲ್ಲಿ ಸೇರಿಸಲು 6ನೇ ವೇತನ ಆಯೋಗ ಶಿಫಾರಸ್ಸು ಮಾಡಿದೆಯೇ ;

(ಆ) ಈ ಎಕ್ಸ್‌ಗ್ರೇಷಿಯಾ ಎಲ್ಲಾ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳು ಪದವಿ ಪೂರ್ವ ಉಪನ್ಯಾಸಕರು ಪ್ರಾಚಾರ್ಯರು ಇವರುಗಳಿಗೆ ನೀಡಲಾಗಿತ್ತೇ ; ನೀಡಿರದಿದ್ದರೆ, ಯಾರಿಗೆ ಯಾವ ಯಾವ ಕಾರಣಕ್ಕಾಗಿ ನೀಡಲಾಗಿಲ್ಲ ; (ಸಂಪೂರ್ಣ ವಿವರ ನೀಡುವುದು) ನೀಡಿದ್ದಲ್ಲಿ, ಈ ಹೆಚ್ಚುವರಿ ವೇತನ ಬಡ್ತಿಯನ್ನು ಮರು ಪಾವತಿಸಿಕೊಳ್ಳಲು ಆದೇಶ ಹೊರಡಿಸಲಾಗಿದೆಯೇ ; ಹೊರಡಿಸಿದ್ದರೆ, ಯಾವ ಕಾರಣಕ್ಕೆ ಹೊರಡಿಸಲಾಗಿದೆ ;

(ಇ) ದಿನಾಂಕ:01-08-2008ರ ನಂತರ ನೇಮಕವಾದ ಪ್ರೌಢ ಶಾಲಾ ಶಿಕ್ಷಕರು, ಮುಖ್ಯಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರುಗಳು ಎಕ್ಸ್‌ಗ್ರೇಷಿಯಾ ಇನ್‌ಕ್ರಿಮೆಂಟ್ ಆಗಿ ಮೂಲವೇತನದಲ್ಲಿ ಸೇರಿಸುವಲ್ಲಿ, ಅನ್ಯಾಯಕ್ಕೆ ಒಳಗಾಗಿದ್ದಾರೆ ಎಂಬುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ನಿಯಮಗಳನ್ನು ರೂಪಿಸಿರುವ ಸರ್ಕಾರವೇ ನಿಯಮಗಳ ನೆಪವೊಡ್ಡಿ ಇವರಿಗೆ ಅನ್ಯಾಯ ಮಾಡುವುದು ಸರಿಯೇ; ಯಾವ ಕಾಲಮಿತಿಯೊಳಗೆ ಇವರಿಗೂ ಈ ಸೌಲಭ್ಯ ಒದಗಿಸಲಾಗುವುದು ; ಹಾಗೂ ಮರು ಪಾವತಿಸಿಕೊಳ್ಳುವ ಆದೇಶವನ್ನು ವಾಪಸ್ಸು ಪಡೆಯಲಾಗುವುದೇ? (ಸಂಪೂರ್ಣ ವಿವರ ನೀಡುವುದು)